# ಉಪಶಮನಕ್ಕಾಗಿ ಓದು- ಒಂದು ಗ್ರಂಥಾಲಯ ಯೋಜನೆ

-ಲಕ್ಷ್ಮೀ ಕರುಣಾಕರನ್

..................................

ಶಾಲೆಗಳು ಪುನರಾರಂಭವಾದಂತೆ ನಮ್ಮ ಸಾರ್ವಜನಿಕ ಶಿಕ್ಷಣ ವ್ಯವಸ್ಥೆಯು, ತರಗತಿ ಕೊಠಡಿಗಳಿಂದ ಕಾಣೆಯಾದ ಮಕ್ಕಳು, ವಲಸೆಯಿಂದಾಗಿ ಕಳೆದು ಹೋದ ಮಕ್ಕಳು, ಬಾಲ ಕಾರ್ಮಿಕರು, ಬಾಲ್ಯ ವಿವಾಹಿತರು ಮೊದಲಾದ ಕಾರಣಗಳಿಗೆ ಹೋರಾಡಬೇಕಾಗುತ್ತದೆ. ಇದು ತುರ್ತು ಸವಾಲಾಗಿದ್ದರೂ, ಇನ್ನೊಂದು ಮರೆಯಲ್ಲಿರುವ ಸವಾಲೆಂದರೆ, ಶಾಲೆಗ ಮರಳುವ ಮಕ್ಕಳದ್ದು. ಈ ಮಕ್ಕಳಿಗೆ ಹಿಂಜರಿತವನ್ನು ನಿಭಾಯಿಸಲು ಶೈಕ್ಷಣಿಕ ಬೆಂಬಲ ಮಾತ್ರವಲ್ಲದೆ, ಸಾಂಕ್ರಾಮಿಕದ ಕಾಲದಲ್ಲಿ ಬದುಕನ್ನು ಅರ್ಥ ಕಂಡುಕೊಳ್ಳಲು, ಪರಿಹರಿಸಲು ಹಾಗು ಮತ್ತೆ ಕಲಿಕೆಗೆ ಸಿದ್ಧರಾಗಲು ಮಾನಸಿಕ-ಸಾಮಾಜಿಕ ಬೆಂಬಲ ಕೊಡಬೇಕಾಗುತ್ತದೆ. ಶೈಕ್ಷಣಿಕ ಹಿಂಜರಿತವನ್ನು ನಿರ್ವಹಿಸಲು ಶೈಕ್ಷಣಿಕ ವ್ಯವಸ್ಥೆ ಸಿದ್ಧವಾಗಿದ್ದರೂ, ಸಾಂಕ್ರಾಮಿಕದ ವೇಳೆ ಉಂಟಾದ ಸಾಮಾಜಿಕ ಮತ್ತು ಭಾವನಾತ್ಮಕ ಹಿಂಜರಿತಕ್ಕೆ ಶಿಕ್ಷಕರು ಮತ್ತು ಶಿಕ್ಷಣ ತಜ್ಞರು ಸಮಾನ ಪ್ರಾಮುಖ್ಯತೆ ಕೊಡುವುದು ಮುಖ್ಯ.

## ಹಿಂಜರಿತಕ್ಕೆ ಕಾರಣವಾಗುವ ಒತ್ತಡ:

ಕೋವಿಡ್-19 ಸಾಂಕ್ರಾಮಿಕದ ವೇಳೆ ಮಕ್ಕಳು ತೀವ್ರವಾದ ಒತ್ತಡಕ್ಕೆ ಸಿಲುಕಿದ್ದರು. ಸೋಂಕು ಹರಡುವ ಭೀತಿ, ಕುಟುಂಬದ ಸದಸ್ಯರ ಮರಣ, ಶಿಕ್ಷಕರು-ಸ್ನೇಹಿತರನ್ನು ಭೇಟಿಯಾಗಲು ಅವಕಾಶ ಇಲ್ಲದೆ ಇರುವುದು, ಬಲವಂತದ ವಲಸೆ, ಮನೆಯಲ್ಲಿ ಹಿಂಸೆ ಹಾಗು ದೌರ್ಜನ್ಯ ಮತ್ತಿತರ ಒತ್ತಡಗಳಿಗೆ ಅವರು ಈಡಾಗಬೇಕಾಯಿತು. ಲಾಕ್‌ಡೌನ್ ವೇಳೆ ಚೈಲ್ಡ್‌ಲೈನ್ ಇಂಡಿಯಾ ಸಹಾಯವಾಣಿ ರಿಂಗಣಿಸುವುದು ನಿಂತೇ ಇಲ್ಲ. ಇದು ಮಕ್ಕಳು ಅನುಭವಿಸಿದ ಸಂಕಟದ ಸೂಚನೆಯಾಗಿದೆ. 2020ರ ಲಾಕ್‌ಡೌನ್‌ನ ಮೊದಲ 11 ದಿನದಲ್ಲಿ ದೌರ್ಜನ್ಯ ಹಾಗು ಹಿಂಸೆಯಿಂದ ರಕ್ಷಿಸಬೇಕೆಂದು ಸಹಾಯವಾಣಿಗೆ 92,000 (SOS calls) ಕರೆಗಳು ಬಂದಿದ್ದವು.

ಯಾಲೆ ವೈದ್ಯಕೀಯ ಶಾಲೆಯ ಮಕ್ಕಳ ಅಧ್ಯಯನ ಕೇಂದ್ರದ ಸಹಾಯಕ ಪ್ರಾಧ್ಯಾಪಕಿ ಮತ್ತು ಯಾಲೆಯ ಆರಂಭಿಕ ಬಾಲ್ಯ ಶಿಕ್ಷಣ ಕಾರ್ಯಕ್ರಮದ ಸಹಾಯಕ ನಿರ್ದೇಶಕಿ ನ್ಯಾನ್ಸಿ ಕ್ಲೋಸ್ ಪ್ರಕಾರ 1, "ನಾನು ಸಾಕಷ್ಟು ಹಿಂಜರಿತವನ್ನು ನೋಡುತ್ತಿದ್ದೇನೆ ಮತ್ತು ಇದಕ್ಕೂ ಮಿಗಿಲಾಗಿ, ವಿಶಿಷ್ಟ ಕಾಲಘಟ್ಟದಲ್ಲಿ ಸಮರ್ಪಕ ಬೆಳವಣಿಗೆಯ ವಿಚಾರ. ಶಿಶುಗಳ ಭಾಷೆ ಬಳಕೆ, ದಿನನಿತ್ಯದ ಕೆಲಸದಲ್ಲಿ ನೆರವಿನ ಅಗತ್ಯ, ನಿದ್ರೆ ಮತ್ತು ಶೌಚ ಕ್ರಿಯೆಯಲ್ಲಿ ನೆರವು ಮತ್ತು ಸಾಮಾನ್ಯವಾಗಿ ಅಗತ್ಯವಿರುವುದಕ್ಕಿಂತ ಹೆಚ್ಚು ನೆರವನ್ನು ಕೋರುವ ಮೂಲಕ ಹಿಂಜರಿತಗೊಂಡ ಮಕ್ಕಳನ್ನು ನಾನು ನೋಡಿದ್ದೇನೆ. ಒತ್ತಡದ ನಿಭಾವಣೆ ಮತ್ತು ಭಾವನೆಗಳ ಬಲವಾದ ಅಭಿವ್ಯಕ್ತಿ

ನಿಜವಾಗಿಯೂ ಸವಾಲಾಗಿದ್ದು, ಇದರಿಂದಾಗಿ ಹಿರಿಯ ಮತ್ತು ಕಿರಿಯ ಮಕ್ಕಳಲ್ಲಿ ಹಾಗು ಕಾಲೇಜು ವಿದ್ಯಾರ್ಥಿಗಳಲ್ಲಿ ಕೂಡ ಸಿಡುಕುವ ಮನೋಭಾವವನ್ನು ಕಾಣುತ್ತಿದ್ದೇವೆ; ವರ್ತನೆಯಲ್ಲಿ ಸಾಕಷ್ಟು ಬದಲಾವಣೆಯನ್ನು ನೋಡುತ್ತಿದ್ದೇವೆ. ತಮ್ಮ ಸ್ನೇಹಿತರು ಮತ್ತು ಶಿಕ್ಷಕರೊಂದಿಗೆ ಇರಲು ಸಾಧ್ಯವಾಗದೆ ಇರುವುದರಿಂದ, ನಿಜವಾಗಿಯೂ ದುಃಖಿತರಾಗಿರುವುದನ್ನು, ಶಾಲಾ ವಾತಾವರಣ ಬದಲಾಗಿ ಉತ್ಪ್ರೇಕ್ಷಿತ ಭಾವನೆಗಳು ಮತ್ತು ವರ್ತನೆಯನ್ನು ಪ್ರದರ್ಶಿಸುವುದನ್ನು ನಾವು ಕಂಡಿದ್ದೇವೆ. ಈ ಎಲ್ಲ ಅನಿಶ್ಚಿತತೆಗಳು ಸಾಕಷ್ಟು ಮೇಲುಗೈ ಸಾಧಿಸಿವೆ ಮತ್ತು ಹೆಚ್ಚು ನಿರಾಶೆಗೊಳಿಸುತ್ತವೆ. ಏಕೆಂದರೆ, ನಾವೆಲ್ಲರೂ ಸಾಮಾನ್ಯವಾದುದನ್ನು ಮತ್ತು ಊಹಿಸಬಹುದಾದ್ದನ್ನು ನಿಲುಕಿಸಿಕೊಳ್ಳಲು ಪ್ರಯತ್ನಿಸುತ್ತೇವೆ. ಕೋವಿಡ್ 19ರ ಕಾಲದಲ್ಲಿ ಸ್ಥಿರತೆಯ ಗಳಿಕೆ ಹಾಗು ಮುನ್ಸೂಚನೆಯನ್ನು ಅರ್ಥ ಮಾಡಿಕೊಳ್ಳುವುದು ಕ್ಲಿಷ್ಟಕರ ಎಂದು ನಾವು ಕಂಡುಕೊಂಡೆವು. ಇದು ಮಕ್ಕಳಲ್ಲಿ ಆತಂಕ ಮತ್ತು ಹತಾಶೆ ಹುಟ್ಟಿಸುವುದರಿಂದ, ಖಂಡಿತವಾಗಿಯೂ ಅನಿಯಂತ್ರಿತ ನಡವಳಿಕೆಗೆ ಕಾರಣವಾಗುತ್ತದೆ.' ಮಕ್ಕಳು ಶಾಲೆಗೆ ಮತ್ತೆ ಮರಳಿದಂತೆ, ಅವರ ವೈಯಕ್ತಿಕ ಮತ್ತು ಸಮಗ್ರ ಮಾಗುವಿಕೆಗೆ ಅವಕಾಶವನ್ನು ಸೃಷ್ಟಿಸುವುದರಿಂದ, ಅವರು ಮತ್ತೆ ಸಂಪರ್ಕ ಸಾಧಿಸುವುದು ಹಾಗು ಶಾಲಾ ವಾತಾವರಣದಲ್ಲಿ ಕಲಿಕೆಗೆ ಸಿದ್ಧಗೊಳ್ಳುವುದನ್ನು ಖಾತ್ರಿಗೊಳಿಸುವುದು ಮುಖ್ಯವಾಗುತ್ತದೆ.ಮಾಗುವಿಕೆಗೆ ಕತೆಗಳ ಬಳಕೆ:

ಶಿಕ್ಷಕರು ಹಾಗು ಶಿಕ್ಷಣ ತಜ್ಞರು ತಮ್ಮ ಮುಂದೆ ಇರುವ ಇಂಥ ಮುಖ್ಯ ಕೆಲಸಕ್ಕೆ ಹೇಗೆ ಸಿದ್ಧವಾಗುತ್ತಾರೆ? ಈ ಉಪಕ್ರಮದಲ್ಲಿ ಮಕ್ಕಳ ಸಾಹಿತ್ಯ ಮತ್ತು ಕತೆಗಳನ್ನು ನೆರವಿನ ಸಾಧನಗಳಾಗಿ ಬಳಸಬಹುದೇ? ಇದಕ್ಕಾಗಿ ನಾವು ಬರಹವನ್ನು ಬೇರೆಯದೇ ದೃಷ್ಟಿಕೋನದಲ್ಲಿ ನೋಡಬೇಕಾಗುತ್ತದೆ. ಓದುವಿಕೆಯು ಕೇವಲ ವಾಚನ ಮಾತ್ರವಲ್ಲ: ಬದಲಾಗಿ, ನಾವು ಬದುಕುವ ಜಗತ್ತನ್ನು ಅರ್ಥ ಮಾಡಿಕೊಳ್ಳುವ, ರಹಸ್ಯವನ್ನು ಭೇದಿಸುವ ಹಾಗು ಅಂತಸ್ಥಗೊಳಿಸುವ ಕ್ರಿಯೆ. ಡೆನಿಸ್ ವಾನ್ ಸ್ಟಾಕರ್ ಹೇಳುತ್ತಾರೆ ([ii]," ವಿಶ್ವಾತ್ಮಕ ದೃಷ್ಟಿಕೋನದಲ್ಲಿ ನೋಡಿದರೆ, ಓದು ಎನ್ನುವುದು ಒಂದು ಸಂಕೀರ್ಣ ಚಟುವಟಿಕೆ: ಕೇವಲಸಂಕೇತಗಳನ್ನು ಬಿಡಿಸುವುದಲ್ಲ. ಆದರೆ, ಅದು ಮಗುವೊಂದು ತಾನು ಓದಿದ್ದನ್ನು ಅರ್ಥ ಮಾಡಿಕೊಳ್ಳುವ ಸಾಮರ್ಥ್ಯವನ್ನುಒಳಗೊಳ್ಳುವಂತೆ ನೋಡಿಕೊಳ್ಳುವ, ವಿಮರ್ಶಾತ್ಮಕ ದೃಷ್ಟಿಯಲ್ಲಿ ವಿಶ್ಲೇಷಿಸುವ ಮೂಲಕ ತನ್ನದೇ ಸನ್ನಿವೇಶ ಮತ್ತು ವೈಯಕ್ತಿಕ ಅನುಭವಕ್ಕೆ ಅದನ್ನು ಅಂತರ್ಗತಗೊಳಿಸಿಕೊಳ್ಳುವ ಮೂಲಕ ತಾನು ಓದಿದ್ದರ ಬಗ್ಗೆ ನಿಲುವೊಂದನ್ನು ತೆಗೆದುಕೊಳ್ಳುವ ಸಾಮರ್ಥ್ಯ ಗಳಿಕೆಗೆ ನೆರವಾಗುತ್ತದೆ. ಇಂಥ ಸಂಪೂರ್ಣವಾದ ಮತ್ತು ಗಾಢವಾದ ಓದು ಮಾತ್ರ ಮಕ್ಕಳನ್ನು ನಿಜವಾದ ಮತ್ತು ಸಮಗ್ರವಾದ ಸಾಕ್ಷರತೆಯತ್ತ ಕೊಂಡೊಯ್ಯುತ್ತದೆ'.

---ಬಾಕ್ಸ್---

ಆದ್ದರಿಂದ ಕತೆಗಳ ಓದು ಮತ್ತು ಕೇಳುವಿಕೆಗಳು ಮಕ್ಕಳು ತಮ್ಮ ಬದಲಾಗುತ್ತಿರುವ ಜಗತ್ತನ್ನು ಅರ್ಥೈಸುವಲ್ಲಿ ಆಂತರಿಕವಾಗಿ ಮತ್ತು ಬಹಿರಂಗವಾಗಿ ಪ್ರಮುಖ ಪಾತ್ರವನ್ನು ವಹಿಸುತ್ತವೆ. ಇದನ್ನು ಬೆಂಬಲಿಸುವ ಮುಖ್ಯ ಚೌಕಟ್ಟೆಂದರೆ, ಕತೆಗಳನ್ನು ಸಾಮಾಜಿಕ ಮತ್ತು ಭಾವನಾತ್ಮಕ ಕಲಿಕೆಗೆ ಮಾಧ್ಯಮವನ್ನಾಗಿ ಬಳಸಿಕೊಳ್ಳುವುದು ಮತ್ತು ಈ ಪ್ರಕ್ರಿಯೆಯು ಮಾಗಲು ಅವಕಾಶ ನೀಡುತ್ತದೆ.

---ಬಾಕ್ಸ್---

ನಾನು ದಕ್ಷಿಣ ಭಾರತದಲ್ಲಿ ಕಸ ಸಂಗ್ರಹಿಸುವ ಅಸಂಘಟಿತ ಕಾರ್ಮಿಕರ ಜೊತೆ ಕೆಲಸ ಮಾಡುವ ಲಾಭರಹಿತ ಸಂಸ್ಥೆಯಾದ ಹಸಿರುದಳದ ಬುಗುರಿ ಸಮುದಾಯ ಗ್ರಂಥಾಲಯ ಯೋಜನೆಯಲ್ಲಿ (*Buguri Community Library Project*) ಕೆಲಸ ಮಾಡುತ್ತೇನೆ. ಈ ಉಪಕ್ರಮವು ತ್ಯಾಜ್ಯ ಸಂಗ್ರಹಿಸುವವರು ಇರುವ ವಠಾರಗಳಲ್ಲಿ ಸಮುದಾಯ ಗ್ರಂಥಾಲಯವನ್ನು ನಡೆಸುತ್ತದೆ

ಮತ್ತು ಸಮುದಾಯದ ಎಲ್ಲ ಮಕ್ಕಳಿಗೆ ಪುಸ್ತಕ ಲಭ್ಯವಾಗುವಂತೆ ಮಾಡುತ್ತದೆ. ಕಸ ಸಂಗ್ರಹಿಸುವವರ ಮಕ್ಕಳು ಅತ್ಯಂತ ಬದಿಗೊತ್ತಲ್ಪಟ್ಟವರು ಹಾಗು ಅಪಾಯಕ್ಕೆ ಸಿಲುಕುವವರಾದ್ದರಿಂದ, ಅವರ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯಗಳಿಗೆ ಸ್ಪಂದಿಸುವುದು ಗ್ರಂಥಾಲಯ ಯೋಜನೆಗೆ ಮುಖ್ಯವಾಗಿತ್ತು. ಗ್ರಂಥಾಲಯದಲ್ಲಿ ಈ ಮಕ್ಕಳ ಅಗತ್ಯಗಳನ್ನು ನಮ್ಮ ಕೆಲಸದೊಳಗೆ ಅಂತರ್ಗತಗೊಳಿಸಿಕೊಳ್ಳುವ ಗುರಿ ಮತ್ತು ಪ್ರಯತ್ನ ಇದ್ದಿತ್ತು.

ಭಾವನೆಗಳ ಶಬ್ದಭಂಡಾರದ ಸೃಷ್ಟಿ:

ಸಮಾಜೋ ಭಾವನಾತ್ಮಕ ಕಲಿಕೆಯ ಪ್ರಮುಖ ಸ್ವರೂಪವೆಂದರೆ, ವ್ಯಕ್ತಿ ತನ್ನ ಭಾವನೆಗಳನ್ನು ಗುರುತಿಸುವ ಮತ್ತು ಅಭಿವ್ಯಕ್ತಿಸುವ ಸಾಮರ್ಥ್ಯ. ಹಲವು ಬಾರಿ ಮಕ್ಕಳು ತಮ್ಮ ಭಾವನೆಗಳನ್ನು ಅಭಿವ್ಯಕ್ತಿಸಲು ಅಥವಾ ಅಗತ್ಯಗಳನ್ನು ಗುರುತಿಸಲು ಪ್ರಯಾಸಪಡುತ್ತಾರೆ. ಅಷ್ಟಲ್ಲದೆ, ನಮ್ಮ ಸಾಂಸ್ಕೃತಿಕ ಸನ್ನಿವೇಶದಲ್ಲಿ ಕೋಪ, ದುಃಖದಂಥ ಕೆಲವು ನಿರ್ದಿಷ್ಟ ಭಾವನೆಗಳ ಬಗ್ಗೆ ಮಾತನಾಡುವುದು ಹಾಗು ಅಭಿವ್ಯಕ್ತಿಸುವುದನ್ನು ಪ್ರೋತ್ಸಾಹಿಸುವುದಿಲ್ಲ.

ಮೂರು ವರ್ಷಗಳ ಹಿಂದೆ ನಾನು ಸಾಮಾಜಿಕ ಮತ್ತು ಭಾವನಾತ್ಮಕ ಕಲಿಕೆ (Social and Emotional Learning - SEL ) ಮಾದರಿಯೊಂದರ ಮೇಲೆ ಈವರೆಗೆ ಭಾವನೆಗಳ ಬಗ್ಗೆ ಮಾತನ್ನಾನಾದ ಮಕ್ಕಳ ಗುಂಪಿನೊಟ್ಟಿಗೆ ಕೆಲಸ ಮಾಡಲಾರಂಭಿಸಿದಾಗ, ನಾನಾ ಭಾವನೆಗಳನ್ನು ವ್ಯಕ್ತಪಡಿಸುತ್ತಿರುವ ಗೊಂಬೆಗಳನ್ನು ಬಳಸಿದೆ. ನಗುಮುಖವುಳ್ಳ ಗೊಂಬೆಯೊಂದನ್ನು ತೋರಿಸಿ, ಭಾವನೆ ಯಾವುದು ಎಂದು ಮಕ್ಕಳನ್ನು ಕೇಳಿದಾಗ ಬಹುತೇಕರು "ನಗು' ಎಂದು ಪ್ರತಿಕ್ರಿಯಿಸಿದರು. ಮೊದಲ ಕೆಲವು ಸಭೆಗಳಲ್ಲಿ ಮೂಲಭೂತ ಭಾವನೆಗಳನ್ನು ಹೆಸರಿಸುವಲ್ಲಿನ ವ್ಯತ್ಯಾಸ ಹಾಗು ಅರ್ಥವನ್ನು ತಿಳಿಸಿಕೊಡಲಾಯಿತು. ಈ ಹೆಸರಿಸುವಿಕೆಯು ಅಭಿವ್ಯಕ್ತಿಯ ಪ್ರಮುಖ ಭಾಗ; ಉದಾಹರಣೆಗೆ, "ನಾನು ನಿಮ್ಮೊಡನೆ ಮಾತನಾಡುತ್ತಿಲ್ಲ. ಏಕೆಂದರೆ, ನಾನು ದುಃಖದಲ್ಲಿದ್ದೇನೆ'. ವಿದ್ಯಾರ್ಥಿಗಳಿಗೆ ಭಾವನೆಗೆ ಪ್ರತಿಕ್ರಿಯೆಯೇನು ಮತ್ತು ಅದಕ್ಕೆ ಕಾರಣ/ಆರಂಭಕ್ಕೆ ಪ್ರಚೋದನೆ ನೀಡಿದ್ದು ಯಾವುದು ಎಂಬುದರ ನಡುವಿನ ವ್ಯತ್ಯಾಸವನ್ನು, ಉದಾಹರಣೆಗೆ, ನಗು ಅಥವಾ ವಿನೋದದಿಂದ ಸಂತೋಷ ಉಂಟಾಯಿತೇ ಅಥವಾ ದುಃಖದಿಂದಾಗಿ ಅಳು ಬಂದಿತ್ತೇ (ಬಹುತೇಕ ಪ್ರಸಂಗಗಳಲ್ಲಿ) ಎಂಬುದನ್ನು ಕಂಡುಕೊಳ್ಳಲು ಕೆಲಕಾಲ ಹಿಡಿಯಿತು. ಗುಂಪು ಮೂಲಭೂತ ಭಾವನೆಗಳನ್ನು ಹೆಸರಿಸುವಲ್ಲಿ ಮತ್ತು ತಮ್ಮ ಕತೆಗಳನ್ನು ಹಂಚಿಕೊಳ್ಳುವಷ್ಟು ಪ್ರಬುದ್ಧವಾದ ಬಳಿಕ, ಸಮ್ಮಿಶ್ರ ಭಾವನೆಗಳ ಬಗ್ಗೆ ಸಂಭಾಷಣೆಗಳನ್ನು ಆರಂಭಿಸಿದೆವು. ಉದಾಹರಣೆಗೆ, ಮಗುವೊಂದನ್ನು ತಾಯಿ ಬೈದಾಗ, ನಿನಗೇನು ಅನ್ನಿಸಿತು ಎಂದು ಕೇಳಿದೆವು. ನನಗೆ ಸಿಟ್ಟುಬಂತು. ನಾನು ಅಳಲಾರಂಭಿಸಿದೆ ಎಂದು ಆಕೆ ಹೇಳಿದಳು. ಬೇರೇನೋ ಭಾವನೆ ಬಂದಿತ್ತಲ್ಲವೇ ಎಂದು ಕೇಳಿ ದುಃಖದ ಮುಖಭಾವವಿದ್ದ ಗೊಂಬೆಯನ್ನು ತೋರಿಸಿದಾಗ, ಆಕೆ ಹೌದು ಎಂದಳು. ಇದು ಸಮ್ಮಿಶ್ರ ಭಾವನೆಗಳ ಬಗ್ಗೆ ಸಂವಾದಕ್ಕೆ ದಾರಿಮಾಡಿಕೊಟ್ಟಿತು. ನನ್ನ ಆಲೋಚನೆಯ ಪ್ರಕಾರ, ಇದು ಸ್ವಯಂಜಾಗೃತಿ ಬೆಳೆಸಿಕೊಳ್ಳುವಲ್ಲಿ ಪ್ರಮುಖ ಹಂತವಾಗಿದ್ದು, ಆಲೋಚನೆಗಳು ಮತ್ತು ಭಾವನೆಗಳನ್ನು ಪ್ರತಿಕ್ರಿಯೆಗಳು ಹಾಗೂ ವರ್ತನೆಗೆ ತಳುಕು ಹಾಕುವ ಸಾಮರ್ಥ್ಯವನ್ನು ಬೆಳೆಸಿಕೊಳ್ಳಲು ನೆರವಾಗುತ್ತದೆ.

ಅನುಭವಿಸಿದ ಭಾವನೆ ಹಾಗು ಅದಕ್ಕೆ ಬರುವ ಪ್ರತಿಕ್ರಿಯೆಯ ನಡುವೆ ಸಂಪರ್ಕ ಕಲ್ಪಿಸಲು ಶಬ್ದಭಂಡಾರವನ್ನು ಬೆಳೆಸುವುದು ಸಾಮಾಜಿಕ ಮತ್ತು ಭಾವನಾತ್ಮಕ ಕಲಿಕೆಯ ಮುಖ್ಯ ಆರಂಭಿಕ ಬಿಂದುವಾಯಿತು. ಟಾಡ್ ಮತ್ತು ಪೆಗ್ಗಿ ಸ್ನೋ ಬರೆದ ಫೀಲಿಂಗ್ಸ್ ಟು ಶೇರ್ ಎ ಟು ಝಡ್, ಜನನ್ ಕೇನ್ ಅವರ ದಿ ವೇ ಐ ಫೀಲ್ ಮತ್ತು ಡಾ.ಸ್ಯೂಸ್ ಅವರ ಮೈ ಮೆನಿ ಕಲರ್ಡ್ ಡೇಸ್ ಮತ್ತಿತರ ಪುಸ್ತಕಗಳು ಮಕ್ಕಳು ತಮ್ಮ ಭಾವನೆಗಳನ್ನು ಹೆಸರಿಸಬೇಕು, ಅನುಭವಿಸಬೇಕು ಹಾಗು ಹಂಚಿಕೊಳ್ಳಬೇಕು ಎಂದು ಹೇಳುತ್ತವೆ.ಸಮಾಜೋ ಭಾವನಾತ್ಮಕ ಕಲಿಕೆಗೆ ಚಿತ್ರಗಳುಳ್ಳ ಪುಸ್ತಕಗಳು:

ಮಕ್ಕಳ ಪರ ವಕೀಲೆ ಹಾಗು ಲೇಖಕಿ ಟ್ರೂಡಿ ಲುಡ್ವಿಗ್ ತಮ್ಮ ಲೇಖನ "ಯೂಸಿಂಗ್ ಚಿಲ್ಡ್ರನ್ಸ್ ಲಿಟರೇಚರ್ ಟು ಬಿಲ್ಡ್ ಸೋಷಿಯಲ್-ಎಮೋಷನಲ್ ಸ್ಕಿಲ್"([iii]) ನಲ್ಲಿ "ಉತ್ತಮವಾಗಿ ಬರೆದ, ಬೆಳವಣಿಗೆಯ ವಯಸ್ಸಿಗೆ ಸೂಕ್ತವಾದ ಸಾಹಿತ್ಯವು ಕಲಿಸಬಹುದಾಧ ಆಶ್ಚರ್ಯಕರ ಕ್ಷಣಗಳನ್ನು ಮಕ್ಕಳಿಗೆ ನೀಡುತ್ತದೆ: ಅವು.,

* ಕಥೆಯ ನಾಯಕನ ಜೊತೆಗೆ ಗುರುತಿಸಿಕೊಳ್ಳುವುದು

* ಪಾತ್ರದ ಆಲೋಚನೆಗಳು, ಭಾವನೆಗಳು ಮತ್ತು ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಕ್ರಿಯೆಗಳ ಬಗ್ಗೆ ಒಳನೋಟಗಳನ್ನು ಗಳಿಸಿಕೊಳ್ಳುವುದು

* ಇಂಥ ಸಮಸ್ಯೆ ಇರುವುದು ನಮಗೆ ಮಾತ್ರ ಅಲ್ಲ ಎಂದು ತಿಳಿದುಕೊಳ್ಳುವ ಮೂಲಕ ಭಾವಶುದ್ಧಿ (ಹುದುಗಿದ್ದ ಭಾವನೆಗಳನ್ನು ಬಿಡುಗಡೆಗೊಳಿಸುವುದು)ಯನ್ನು ಅನುಭವಿಸುವುದು

* ಪಾತ್ರಗಳು ತಮ್ಮ ಸಮಸ್ಯೆಗಳನ್ನು ಹೇಗೆ ನಿರ್ವಹಿಸಿದವು ಮತ್ತು ಹೇಗೆ ಅವರ ಕ್ರಿಯೆಗಳು ಅಥವಾ ಮಾತು ಆಡಲ್ಪಟ್ಟವು ಎಂಬುದನ್ನು ನೋಡಿ, ತಮ್ಮ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳಲು ಸಾಧ್ಯವಿರುವ ಬೇರೆ ಮಾರ್ಗಗಳನ್ನು ಶೋಧಿಸುವುದು.

* ಸಂವಾದದ ಸ್ವಾಭಾವಿಕ ಮುಂದುವರಿಕೆಯಾಗಿ ವೈಯಕ್ತಿಕ ಅನುಭವಗಳನ್ನು ಹಂಚಿಕೊಳ್ಳುವುದು".

---ಬಾಕ್ಸ್----

ಬೆಳವಣಿಗೆಗೆ ಸೂಕ್ತವಾದ ಚರ್ಚೆಗಳಿಗೆ ವಿಸ್ತರಿಸುವ ಉತ್ತಮ ಕತೆಯೊಂದು ತಾವು ಮತ್ತು/ಅಥವಾ ತಮ್ಮ ಸ್ನೇಹಿತರು ದಿನನಿತ್ಯ ಅನುಭವಿಸುವ ಭಾವನೆಗಳನ್ನು ಪ್ರತಿಫಲಿಸುವ ಘಟನೆಗಳು ಮತ್ತು/ಅಥವಾ ಸಂಘರ್ಷಗಳಿಗೆ ಕಾರಣವಾಗುವ ಭಾವನೆಗಳನ್ನು ಶೋಧಿಸಲು ಮಕ್ಕಳಿಗೆ ಅವಕಾಶ ಒದಗಿಸುತ್ತದೆ. ಈ ಅನುಭವಗಳ ಪ್ರತಿಫಲಿಸುವಿಕೆಯು ಸ್ವಯಂಏಕಾಂಗಿತನದ ಮಾದರಿಗಳಿಂದ ಹೊರಬರಲು ನೆರವಾಗುತ್ತದೆ ಮತ್ತು ಮಕ್ಕಳು ಭಾವನೆಗಳನ್ನು ನಿರ್ವಹಿಸಲು ಹೊಸ ಮಾರ್ಗಗಳನ್ನು ಕಲ್ಪಿಸುತ್ತದೆ.

---ಬಾಕ್ಸ್----

ಗ್ರಂಥಾಲಯದ ಒಂದು ತರಗತಿಯಲ್ಲಿ ಕೋಪವೆಂಬ ಭಾವನೆಯನ್ನು ಶೋಧಿಸಲು ವಿನಾಯಕ್ ವರ್ಮಾ ಅವರ ಆಂಗ್ರಿ ಅಕ್ಕು (ಪ್ರಥಮ್ ಬುಕ್ಸ್) ಪುಸ್ತಕವನ್ನು ನಾನು ಬಳಸಿದೆ ಮತ್ತು ಲುಡ್ವಿಗ್ ಅವರ ಸಿದ್ಧಾಂತದ ಕೆಲ ಅಂಶಗಳು ಕಾರ್ಯಾಚರಣೆಯಲ್ಲಿ ಇದ್ದುದನ್ನು ಕಂಡೆ. ಶಾಲೆಯಲ್ಲಿ ನಡೆದ ತಬ್ಬಿಬ್ಬುಗೊಳಿಸುವ ಘಟನೆಯಿಂದ ಅಕ್ಕು ಸಂಕಟಪಡುತ್ತಿದ್ದ ಭಾಗದಲ್ಲಿ ಪುಸ್ತಕ ವಾಚನವನ್ನು ನಿಲ್ಲಿಸಿದೆ. ಆಕೆ ಇಂಥ ಸಂದರ್ಭಧಲ್ಲಿ ಏನು ಮಾಡಬೇಕು ಎಂದು ಮಕ್ಕಳನ್ನು ಕೇಳಿದೆ. ಹೆಚ್ಚಿನವರು ತಂಟೆಕೋರರನ್ನು

ಹೊಡೆಯಬೇಕು ಎಂದರು. ಆದರೆ, ಕತೆ ಮುಂದುವರಿದಂತೆ ಅಕ್ಕು ಏಕೆ ಆ ರೀತಿ ಪ್ರತಿಕ್ರಿಯಿಸಲಿಲ್ಲ ಎಂಬುದು ಅವರಿಗೆ ಗೊತ್ತಾಯಿತು. ಆಕೆ ಏಕೆ ಆ ರೀತಿ ಪ್ರತಿಕ್ರಿಯಿಸಲಿಲ್ಲ ಎಂದು ಮಕ್ಕಳನ್ನು ಮತ್ತೆ ಕೇಳಿದೆ. "ಆಕೆ ಸ್ವನಿಯಂತ್ರಣ ಹೊಂದಿದ್ದಳು' ಎಂದು ಬಾಲಕನೊಬ್ಬ ಹೇಳಿದ. ನಮ್ಮನ್ನು ಯಾವುದು ಸಿಟ್ಟಿಗೇಳಿಸುತ್ತದೆ ಮತ್ತು ಅದಕ್ಕೆ ನಾವು ಯಾವ ರೀತಿ ಪ್ರತಿಕ್ರಿಯಿಸಬೇಕು ಎಂಬ ಚರ್ಚೆಯನ್ನು ಇದು ಹುಟ್ಟುಹಾಕಿತು. ಇನ್ನಿತರ ಘಟನೆಗಳು ಅಂದರೆ, ಸ್ನೇಹಿತರು ಇಲ್ಲವೇ ಶಿಕ್ಷಕರೊಂದಿಗೆ ವೈಯಕ್ತಿಕ ತಿಕ್ಕಾಟ, ಮನೆಯಲ್ಲಿ ನಡೆಯುವ ಹಿಂಸಾಚಾರ ತಮಗೆ ಸಿಟ್ಟು ತರಿಸುತ್ತದೆ ಎಂದು ಮಕ್ಕಳು ಹೇಳಿದರು.

ಕ್ಲಿಷ್ಟ ಭಾವನೆಗಳ ಶೋಧನೆ:

ಇಂಥದ್ದೇ ಇನ್ನೊಂದು ಘಟನೆಯಲ್ಲಿ ನೀನಾ ಸಬ್ನಾನಿ ಅವರ ಪುಸ್ತಕ, ಮುಕುಂದ್ ಆಂಡ್ ರಿಯಾಜ್ (ಟ್ಯುಲಿಕಾ ಬುಕ್ಸ್), ವ್ಯಕ್ತಿಯೊಬ್ಬನ ನಿಯಂತ್ರಣದಲ್ಲಿ ಇಲ್ಲದ ಸನ್ನಿವೇಶದಿಂದಾಗಿ ಕಳೆದು ಹೋದ ಸ್ನೇಹ ಮತ್ತು ಅಂಥ ನೆನಪು ತರುವ ದುಃಖ ಮತ್ತು ಸಂಕಟದ ಬಗ್ಗೆ ಸಂವಾದಕ್ಕೆ ಕಾರಣವಾಯಿತು. ಈ ಪುಸ್ತಕವು 1947ರಲ್ಲಿ ಭಾರತ ಮತ್ತು ಪಾಕಿಸ್ತಾನದ  ವಿಭಜನೆಯ ಹಿನ್ನೆಲೆಯಲ್ಲಿ ಇಬ್ಬರು ಬಾಲಕರ ಸ್ನೇಹವನ್ನು ಶೋಧಿಸುತ್ತದೆ. ಈ ಪುಸ್ತಕದ ವಿಸ್ತರಿಸಿದ ಚಟುವಟಿಕೆ ವೇಳೆ, ನೀವು ನೆನಪಿಸಿಕೊಳ್ಳುವ ವ್ಯಕ್ತಿಯ ಚಿತ್ರ ಇಲ್ಲವೇ ವಿಶೇಷವಾದ ನೆನಪೊಂದರ ಬಗ್ಗೆ ಬರೆಯಲು ಹೇಳಿದಾಗ, 8 ವರ್ಷದ ಶರಣ್ಯ ತನ್ನ ತಂದೆಯ ಚಿತ್ರವನ್ನು ಬರೆದಳು. ಆತ ಹಿಂದಿನ ವರ್ಷ ಆತ್ಮಹತ್ಯೆ ಮಾಡಿಕೊಂಡಿದ್ದರು. ಆಕೆ ಹಲವು ಬಾರಿ ಚಿತ್ರವನ್ನು ಬರೆಯಲು ಯತ್ನಿಸಿದಳು; ಮುಖವನ್ನು ಬರೆದು, ಆನಂತರ ಅಳಿಸಿ ಹಾಕುತ್ತಿದ್ದಳು. ಅಂತಿಮವಾಗಿ ಅವಳು ಎರಡು ಚಿತ್ರಗಳನ್ನು ಬರೆದಳು. ಮೊದಲಿಗೆ ಅದು ತಂದೆಯ ಜೊತೆಗಿನ ಆಕೆಯ ಚಿತ್ರ ಎಂದು ನಾನು ಭಾವಿಸಿದ್ದೆ: ತರಗತಿಯ ಅಂತ್ಯದಲ್ಲಿ ಆಕೆಯನ್ನು ಮೃದುವಾಗಿ ಕೇಳಿದೆ. ಬಲಭಾಗದಲ್ಲಿರುವುದು ತಂದೆ ಹಾಗು ಎಡದಲ್ಲಿರುವುದು ತಾಯಿ ಎಂದಾಕೆ ಹೇಳಿದಳು. ತಾಯಿಯ ಚಿತ್ರ ಹಿರಿದಾಗಿರುವುದನ್ನು ಗಮನಿಸಿದೆ. ಪ್ರಾಯಶಃ ಶರಣ್ಯಳ ಬದುಕಿನಲ್ಲಿ ತಾಯಿಯ ಪಾತ್ರ ಮಹತ್ವದ್ದಾಗಿದ್ದು ಇದಕ್ಕೆ ಕಾರಣ ಇರಬಹುದು.

ಎಚ್ಚರಿಕೆಯಿಂದ ಜೋಡಿಸಿದ ಚಿತ್ರಗಳಿರುವ ಪುಸ್ತಕಗಳು, ಕಾರ್ಯಕ್ರಮಗಳು ಹಾಗು ಮುಖಾಮುಖಿಗಳು ಮಕ್ಕಳ ಸಾಮಾಜಿಕ ಮತ್ತು ಭಾವನಾತ್ಮಕ ಅಗತ್ಯಗಳ ಜೊತೆಗೆ ಅವರ ಬೆಳವಣಿಗೆಯನ್ನು ಉತ್ತೇಜಿಸುತ್ತವೆ; ಸಮೃದ್ಧ ವಿನಿಮಯಕ್ಕೆ ದಾರಿ ಮಾಡಿಕೊಡುತ್ತವೆ. ಶಾಲೆಗೆ ಹಿಂದಿರುಗಿದ ಮಕ್ಕಳಲ್ಲಿ ಹೆಚ್ಚಿನವರು ಸಂಭ್ರಮ ಮತ್ತು ಬಿಡುಗಡೆಯ ಮನೋಭಾವವನ್ನು ಪ್ರದರ್ಶಿಸಿದರೂ, ಅವರ ಅಂತರಂಗದಲ್ಲಿ ಬಹಳಷ್ಟು ಬದಲಾವಣೆ ಆಗಿರುತ್ತದೆ ಮತ್ತು ಅದರ ಶೋಧನೆ ಮತ್ತು ಮಾಗುವಿಕೆ ಅಗತ್ಯವಿರುತ್ತದೆ. ಆದ್ದರಿಂದ, ಶಾಲೆಯಲ್ಲೇ ಸಾಮಾಜಿಕ ಮತ್ತು ಭಾವನಾತ್ಮಕ ಕಲಿಕೆಐ  ಪಠ್ಯಕ್ರಮವನ್ನು ಸೃಷ್ಟಿಸುವುದರಿಂದ ಮತ್ತು ಸಾಹಿತ್ಯ ಹಾಗು ಕತೆಗಳನ್ನು ಬಳಸುವುದು ಈ ಹಂತದಲ್ಲಿ ಮುಖ್ಯ ಮತ್ತು ಅಗತ್ಯ ಬದಲಾವಣೆಯ ಮಾರ್ಗವಾಗಲಿದೆ.

ಟಿಪ್ಪಣಿ: 1. ಈಸ್ ಮೈ ಚೈಲ್ಡ್ ರಿಗ್ರೆಸಿಂಗ್ ಡ್ಯು ಟು ಕೋವಿಡ್ 19 ಪ್ಯಾಂಡೆಮಿಕ್?

2. ಸ್ಟಾಕರ್, ಡೆನಿಸ್ ವಾನ್(2009): ದ ಇಂಪಾರ್ಟೆನ್ಸ್ ಆಫ್ ಲಿಟರಸಿ ಆಂಡ್ ಬುಕ್ಸ್ ಇನ್ ಚಿಲ್ಡ್ರನ್ಸ್ ಡೆವಲಪ್‌ಮೆಂಟ್- ಇಂಟೆಲೆಕ್ಚುಯಲ್, ಅಫೆಕ್ಟಿವ್ ಆಂಡ್ ಸೋಷಿಯಲ್ ಡೈಮೆನ್ಷನ್ಸ್

3, ಲುಡ್ವಿಗ್, ಟ್ರೂಡಿ. ಯೂಸಿಂಗ್ ಚಿಲ್ಡ್ರನ್ಸ್ ಲಿಟರೇಚರ್ ಟು ಬಿಲ್ಡ್ ಸೋಷಿಯಲ್-ಎಮೋಷನಲ್ ಸ್ಕಿಲ್ಸ್. ಸೆ.24,2018

....................

ಲಕ್ಷ್ಮೀ ಕರುಣಾಕರನ್, ಬೆಂಗಳೂರು ಮೂಲದ ಶಿಕ್ಷಕಿ ಮತ್ತು ಸಂವಹನ ವೃತ್ತಿಪರರು. ದೂರಸಂಪರ್ಕ ಎಂಜಿನಿಯರ್, ಸಂವಹನ ಪರಿಣತೆ ಮತ್ತು ಶಿಕ್ಷಕಿಯಾಗಿ ಕಾರ್ಯ ನಿರ್ವಹಿಸಿದ್ದಾರೆ. ದಶಕದಿಂದ ಸರ್ಕಾರಿ ಶಾಲೆ, ವಿಶೇಷ ಅಗತ್ಯಗಳ ಶಾಲೆ ಹಾಗು ಪರಿಹಾರಕ ಶಾಲೆಗಳಲ್ಲಿ ಸಾಮಾಜಿಕ ಬಹಿಷ್ಕಾರವನ್ನು ಅನುಭವಿಸುತ್ತಿರುವ ಮಕ್ಕಳ ಜೊತೆ ಕೆಲಸ ಮಾಡಿದ್ದಾರೆ. ಕರ್ನಾಟಕ ಮತ್ತು ಆಂಧ್ರಪ್ರದೇಶದಲ್ಲಿ ಕಸ ಸಂಗ್ರಹಿಸುವವರ ಜೊತೆ ಕೆಲಸ ಮಾಡುವ ಹಸಿರುದಳ ಸಂಸ್ಥೆಯ ಬುಗುರಿ ಮಕ್ಕಳ ಕಾರ್ಯಕ್ರಮ ಹಾಗು ಶಾಲಾ ನಂತರದ ಗ್ರಂಥಾಲಯ ಮತ್ತು ಕಲಾಕೇಂದ್ರವಾದ ಬುಗುರಿ ಸಮುದಾಯ ಗ್ರಂಥಾಲಯ ಯೋಜನೆಯ ಮುಖ್ಯಸ್ಥರು. 700ಕ್ಕೂ ಅಧಿಕ ಮಕ್ಕಳ ಜೊತೆ ಕೆಲಸ ಮಾಡುತ್ತಿದ್ದಾರೆ. ವಾಸ್ರಾದ ಸೆಂಟರ್ ಫಾರ್ ಕಂಟೆಂಪರರಿ ಆರ್ಟ್ಸ್‌ನ ಕಲಾವಿದೆ ಹಾಗು ಸಿಂಗಾಪುರ ಇಂಟರ್‍ನ್ಯಾಷನಲ್ ಫೌಂಡೇಷನ್‌ನ ಆರ್ಟ್ ಫಾರ್ ಗುಡ್ ಫೆಲೋಶಿಪ್(2019)ಗೆ ಪಾತ್ರರಾಗಿದ್ದಾರೆ. ಟೀಚರ್ಸ್ ಪ್ಲಸ್‌ಗೆ ನಿಯತವಾಗಿ ಬರೆಯುತ್ತಾರೆ. ಇಮೇಲ್: lakshmikarunakaran@gmail.com